# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **2289**

ಸದಸ್ಯರ ಹೆಸರು : ಶ್ರೀ ಪಿ. ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 26-03-2021

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ಮಹಾನಗರದಲ್ಲಿ ದೈನಂದಿನವಾಗಿ ಸಂಚಾರ ನಡೆಸುವ ವಾಹನಗಳ ಅಂದಾಜು ಸಂಖ್ಯೆ ಎಷ್ಟು; ಈ ಪೈಕಿ ಸಾರ್ವಜನಿಕ ಸಂಚಾರ ಸೇವೆಯಲ್ಲಿ ತೊಡಗಿರುವ ಬಸ್ಸು, ಟ್ಯಾಕ್ಸಿ ಮತ್ತು ಆಟೋರಿಕ್ಷಾಗಳ ಹಾಗೂ ಇತರೆ ವಾಹನಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಬೆಂಗಳೂರು ಮಹಾನಗರದಲ್ಲಿ ದಿನಾಂಕ: 28-02-2021ರ ಅಂತ್ಯಕ್ಕೆ ಒಟ್ಟು 1,00,10,982 ವಾಹನಗಳು ನೋಂದಣಿಯಾಗಿ ಚಾಲ್ತಿಯಲ್ಲಿರುತ್ತವೆ. ಸದರಿ ವಾಹನಗಳೂ ಸೇರಿದಂತೆ ಹೊರ ಜಿಲ್ಲೆಗಳ ಮತ್ತು ಹೊರ ರಾಜ್ಯಗಳ ವಾಹನಗಳೂ ಸಹ ನಗರದಲ್ಲಿ ಸಂಚರಿಸುತ್ತವೆ.<br>ದಿನಾಂಕ:28-2-2021ರ ಅಂತ್ಯಕ್ಕೆ ಬೆಂಗಳೂರು ಮಹಾನಗರ ದಲ್ಲಿ ನೋಂದಣಿಯಾಗಿರುವ ವಾಹನಗಳ ಅಂಕಿ-ಅಂಶಗಳ ವಿವರಗಳನ್ನು **"ಅನುಬಂಧ-ಅ"** ದಲ್ಲಿ ಒದಗಿಸಲಾಗಿದೆ.<br>**ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಉತ್ತರ:**<br>ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಿಂದ 6534 ವಾಹನ ಬಲವನ್ನು ಹೊಂದಿರುತ್ತದೆ. ಬೆಂಗಳೂರು ಮಹಾನಗರದಲ್ಲಿ, ಸಂಸ್ಥೆಯಿಂದ ಪ್ರತಿದಿನ ದಿನಾಂಕ 28-02-2021 ರಂತೆ, ಸರಾಸರಿ 5,181 ಸಾರಿಗೆಗಳನ್ನು (ಬಸ್ಸುಗಳನ್ನು) ಕಾರ್ಯಾಚರಣೆಗೊಳಿಸಲಾಗಿದೆ. |
| ಆ. | ಸದರಿ ಬಸ್ಸು, ಟ್ಯಾಕ್ಸಿ ಮತ್ತು ಆಟೋರಿಕ್ಷಾ ವಾಹನಗಳ ಚಾಲಕರು ಸಂಚಾರ ನಿಯಮಗಳನ್ನು ಉಲ್ಲಂಘಿಸಿ ಮೊಬೈಲ್‌ನಲ್ಲಿ ಮಾತನಾಡುತ್ತ ವಾಹನಗಳನ್ನು ಚಾಲನೆ ಮಾಡುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪೊಲೀಸ್ ಇಲಾಖೆಯಿಂದ ಸಾರಿಗೆ ಇಲಾಖೆಗೆ ಎಷ್ಟು ಪ್ರಕರಣಗಳ ಕುರಿತು ವರದಿ ಸಲ್ಲಿಸಿರುತ್ತಾರೆ; (ವಿವರ ನೀಡುವುದು) | ಹೌದು, ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಬಸ್ಸು, ಟ್ಯಾಕ್ಸಿ ಮತ್ತು ಆಟೋರಿಕ್ಷಾ ವಾಹನಗಳ ಚಾಲಕರು ವಾಹನಗಳ ಚಾಲಕರು ಸಂಚಾರ ನಿಯಮಗಳನ್ನು ಉಲ್ಲಂಘಿಸಿ ಮೊಬೈಲ್‌ನಲ್ಲಿ ಮಾತನಾಡುವ ಕುರಿತು ಸಾರಿಗೆ ಇಲಾಖೆಗೆ ಪೊಲೀಸ್ ಇಲಾಖೆಯಿಂದ ಕಳೆದ ನಾಲ್ಕು ವರ್ಷಗಳಲ್ಲಿ ಸ್ವೀಕರಿಸಿದ ಪ್ರಕರಣಗಳ ವಿವರಗಳು ಕೆಳಕಂಡಂತಿವೆ :- |

| ವರ್ಷ | ವಾಹನ ವರ್ಗ | | | ಒಟ್ಟು |
|---|---|---|---|---|
| | ಬಸ್ | ಟ್ಯಾಕ್ಸಿ | ಆಟೋರಿಕ್ಷಾ | |
| 2018 | 44 | 144 | 213 | **401** |
| 2019 | 59 | 35 | 180 | **274** |
| 2020 | 10 | 08 | 74 | **92** |
| 2021 | 02 | 0 | 11 | **13** |

| | | |
|---|---|---|
| ಇ. | ನಮ್ಮ ಮೆಟ್ರೋ ರೈಲು ನಿಲ್ದಾಣದಿಂದ ಸಾರ್ವಜನಿಕರಿಗೆ ತಮ್ಮ ಪ್ರದೇಶಕ್ಕೆ ತಲುಪಲು (Last Mile Connectivity) ಸರ್ಕಾರದಿಂದ ಸಾರ್ವಜನಿಕ ಸಾರಿಗೆ ಸಂಪರ್ಕ ಜಾಲ ರೂಪಿಸಲಾಗಿದೆಯೇ; ರೂಪಿಸಿದ್ದಲ್ಲಿ ನಮ್ಮ ಮೆಟ್ರೋ ಹಾಗೂ ಸಾರಿಗೆ ಇಲಾಖೆ ಸಮನ್ವಯ ಸಮಿತಿ ರಚಿಸಲಾಗಿದೆಯೇ; (ವಿವರ ನೀಡುವುದು) | <u>ನಗರಾಭಿವೃದ್ಧಿ ಇಲಾಖೆಯ ಉತ್ತರ :</u><br>ಹೌದು,<br>ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ಮೆಟ್ರೋ ರೈಲು ನಿಲ್ದಾಣದಿಂದ ಸಾರ್ವಜನಿಕರಿಗೆ ತಮ್ಮ ಪ್ರದೇಶಕ್ಕೆ ತಲುಪಲು ಪ್ರತಿದಿನ 107 ಷೆಡ್ಯೂಲ್‌ಗಳಲ್ಲಿ 1299 ಟ್ರಿಪ್‌ಗಳಲ್ಲಿ ಬಸ್ಸುಗಳನ್ನು ಓಡಿಸುತ್ತಿದೆ.<br>ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ (ಬಿ.ಎಂ.ಟಿ.ಸಿ.) ಹಾಗೂ ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ (ಬಿ.ಎಂ.ಆರ್.ಸಿ.ಎಲ್.) ಗಳ ವ್ಯವಸ್ಥಾಪಕ ನಿರ್ದೇಶಕರುಗಳು ಈ ವ್ಯವಸ್ಥೆಯನ್ನು ಸಮನ್ವಯಗೊಳಿಸುತ್ತಿದ್ದಾರೆ.<br><u>ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಉತ್ತರ:</u><br>ಬೆಂಗಳೂರು ನಗರದಲ್ಲಿ ನಮ್ಮ ಮೆಟ್ರೋ ರೈಲು ನಿಲ್ದಾಣಗಳು ಪ್ರಮುಖ ರಸ್ತೆಗಳಿಗೆ ಹೊಂದಿಕೊಂಡಂತಿದ್ದು, ಬೆಂ.ಮ.ಸಾ. ಸಂಸ್ಥೆಯಿಂದ ಸದರಿ ರಸ್ತೆಗಳಲ್ಲಿ ಮೆಟ್ರೊ ನಿಲ್ದಾಣಗಳ ಮೂಲಕ ಸಾರಿಗೆಗಳನ್ನು ಕಾರ್ಯಾಚರಣೆಗೊಳಿಸಲಾಗುತ್ತಿದೆ.<br>ಅಲ್ಲದೇ, ಮೆಟ್ರೋ ರೈಲು ಪ್ರಯಾಣಿಕರಿಗೆ ಮೆಟ್ರೋ ರೈಲು ನಿಲ್ದಾಣದಿಂದ ವಾಸಸ್ಥಳಗಳಿಗೆ ತಲುಪಲು (First & Last Mile Connectivity) ಮೆಟ್ರೋ ಫೀಡರ್ ಸಾರಿಗೆ ಸೇವೆಗಳನ್ನು ಸಹ ಒದಗಿಸಲಾಗುತ್ತಿದೆ.<br>ಸಂಸ್ಥೆಯಿಂದ, 14 ಮಾರ್ಗಗಳಲ್ಲಿ 65 ಮೆಟ್ರೋ ಫೀಡರ್ ಸೇವೆಗಳನ್ನು (ದಿನಾಂಕ:28-02-2021 ರಂತೆ) ಕಾರ್ಯಾಚರಿಸಲಾಗುತ್ತಿದೆ.<br>ಸಾರ್ವಜನಿಕ ಪ್ರಯಾಣಿಕರಿಗೆ ಅತ್ಯುತ್ತಮ ಸಾರಿಗೆ ಸೇವೆಗಳನ್ನು ಒದಗಿಸುವ ನಿಟ್ಟಿನಲ್ಲಿ ಹಾಗೂ ಬೆಂಗಳೂರು ಮಹಾನಗರದಲ್ಲಿ ಸಾರ್ವಜನಿಕ ಪ್ರಯಾಣಿಕರು ಸುಲಭವಾಗಿ ಬಸ್‌ಗಳಲ್ಲಿ ಸಂಚರಿಸಲು ಅನುವಾಗುವಂತೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ನಗರ ಭೂ ಸಾರಿಗೆ ನಿರ್ದೇಶನಾಲಯ ಸಹಯೋಗದೊಂದಿಗೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಮತ್ತು ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ ಸಂಸ್ಥೆಗಳು ಒಡಂಬಡಿಕೆಯನ್ನು (MoU) ಮಾಡಿಕೊಂಡಿವೆ. |
| (ಈ) | ಬೆಂಗಳೂರು ನಗರದಲ್ಲಿ ವಾಹನ ಸಂಚಾರ ದಟ್ಟಣೆಯನ್ನು (Traffic Density) ತಿಳಿಗೊಳಿಸಿ ಯೋಜನಾ ಬದ್ಧವಾಗಿ ರಸ್ತೆಗಳನ್ನು ನಿರ್ವಹಿಸಿ ಸಂಚಾರ ಸುಗಮ ಗೊಳಿಸುವ ಸಮಗ್ರ ಯೋಜನೆ ಸಿದ್ಧಪಡಿಸಲಾಗಿದೆಯೇ; (ವಿವರ ನೀಡುವುದು) | <u>ನಗರಾಭಿವೃದ್ಧಿ ಇಲಾಖೆಯ ಉತ್ತರ :</u><br>ಈ ಬಗ್ಗೆ ಸಮಗ್ರ ಸಂಚಾರ ಯೋಜನೆ (Comprehensive Mobility Plan) ನ್ನು ತಯಾರಿಸಲಾಗಿದೆ.<br><u>ಒಳಾಡಳಿತ ಇಲಾಖೆಯ ಉತ್ತರ:</u><br>ಒಳಾಡಳಿತ ಇಲಾಖೆಯಿಂದ ಬೆಂಗಳೂರು ನಗರ ಸಂಚಾರ ವಿಭಾಗದಿಂದ ಯೋಜನಾ ಬದ್ಧವಾಗಿ ರಸ್ತೆಗಳನ್ನು ನಿರ್ವಹಿಸಿ ಸಂಚಾರ ಸುಗಮಗೊಳಿಸುವ ಸಮಗ್ರ ಯೋಜನೆಯನ್ನು ಸಿದ್ಧಪಡಿಸಿರುವುದಿಲ್ಲ. ಆದರೆ, ಬೆಂಗಳೂರು ನಗರದಲ್ಲಿ ವಾಹನ ಸಂಚಾರ ದಟ್ಟಣೆಯನ್ನು (Traffic Density) ತಿಳಿಗೊಳಿಸಲು ಕೈಗೊಳ್ಳಲಾಗುತ್ತಿರುವ ಕ್ರಮದ ವಿವರಗಳನ್ನು **"ಅನುಬಂಧ-ಆ"** ರಲ್ಲಿ ಒದಗಿಸಲಾಗಿದೆ. |

| | | |
|---|---|---|
| (ಉ) | ಈ ವಿಷಯದಲ್ಲಿ ಬಿ.ಬಿ.ಎಂ.ಪಿ, ನಗರ ಸಂಚಾರ ಆರಕ್ಷಕ ವಿಭಾಗ, ಪರಿಸರ ಮಾಲಿನ್ಯ ನಿಯಂತ್ರಣ ಇಲಾಖೆ ಮತ್ತು ಜಿಲ್ಲಾಡಳಿತದ ಜೊತೆಗೆ ಸಮನ್ವಯ ಸಾಧಿಸುವ ವ್ಯವಸ್ಥೆ ಇದೆಯೇ? (ಇದ್ದಲ್ಲಿ ಕೈಗೊಂಡ ಕ್ರಮಗಳ ಕುರಿತು ವಿವರ ನೀಡುವುದು) | **ಒಳಾಡಳಿತ ಇಲಾಖೆಯ ಉತ್ತರ:**<br>ಸಂಚಾರ ದಟ್ಟಣೆಯ ನಿವಾರಣೆಗಾಗಿ ಕೈಗೊಳ್ಳಬೇಕಾದ ಕ್ರಮಗಳ ಕುರಿತು ಚರ್ಚಿಸಲು ಮಾನ್ಯ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ರವರ ನೇತೃತ್ವದಲ್ಲಿ ಪ್ರತಿ 15 ದಿವಸಗಳಿಗೊಮ್ಮೆ ವಿವಿಧ ಪೌರ ಸಂಸ್ಥೆಗಳ ಮುಖ್ಯಸ್ಥರುಗಳೊಂದಿಗೆ ಸಮನ್ವಯ ಸಮಿತಿ ಸಭೆಯನ್ನು ಹಮ್ಮಿಕೊಳ್ಳಲಾಗುತ್ತಿರುತ್ತದೆ. ಈ ಸಭೆಯಲ್ಲಿ ಸುಗಮ ಸಂಚಾರ ಹಿತದೃಷ್ಟಿಯಿಂದ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ವಿಸ್ತೃತವಾದ ಚರ್ಚೆಯನ್ನು ನಡೆಸಲಾಗುತ್ತಿರುತ್ತದೆ.<br><br>**ಪರಿಸರ ಇಲಾಖೆ:**<br>ಈ ಸಂಬಂಧದಲ್ಲಿ ಬೆಂಗಳೂರು ನಗರದಲ್ಲಿ ವಾಯು ಮಾಲಿನ್ಯ ನಿಯಂತ್ರಣಕ್ಕೆ ಸಂಬಂಧಿಸಿದಂತೆ 44 ಅಂಶಗಳ ಕ್ರಿಯಾಯೋಜನೆಗಳಿದ್ದು, ಅವುಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಕ್ರಿಯಾ ಯೋಜನೆಗಳಲ್ಲಿ ಸಂಚಾರ ದಟ್ಟಣೆಯನ್ನು ತಿಳಿಗೊಳಿಸುವ ಅಂಶಗಳು ಸಹ ಒಳಗೊಂಡಿರುತ್ತವೆ ಹಾಗೂ ಈ ಎಲ್ಲಾ ಅಂಶಗಳನ್ನು ಅನುಷ್ಠಾನಗೊಳಿಸಲು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಚಾಲನಾ ಸಮಿತಿ (Steering Committee) ರಚಿಸಲಾಗಿದ್ದು, ವಾಯು ಮಾಲಿನ್ಯ ನಿಯಂತ್ರಣ ಕಾರ್ಯಪಡೆಯಾಗಿಯೂ (Task Force) ಸಹ ಕಾರ್ಯನಿರ್ವಹಿಸುತ್ತಿದೆ. ಇದಲ್ಲದೆ ರಾಜ್ಯ ಸರ್ಕಾರದ ಪರಿಸರ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಉಸ್ತುವಾರಿ ಸಮಿತಿ (Monitoring Committee) ಸಹಾ ರಚಿಸಲಾಗಿದ್ದು ವಿವಿಧ ಇಲಾಖೆಗಳೊಂದಿಗೆ ಸಮನ್ವಯ ಸಾಧಿಸುವ ಮೂಲಕ ಸಂಚಾರ ದಟ್ಟಣೆ ಹಾಗೂ ವಾಯು ಮಾಲಿನ್ಯ ನಿಯಂತ್ರಣಕ್ಕೆ ಅಗತ್ಯ ಕ್ರಮ ಕೈಗೊಳ್ಳಲಾಗುತ್ತದೆ. |

ಟಿಡಿ 72 ಟಿಡಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

## ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2289 ಕ್ಕೆ ಅನುಬಂಧ-ಅ

| ಕ್ರ. ಸಂ. | ವಾಹನಗಳ ವರ್ಗ | ದಿ:28-2-2021ರ ಅಂತ್ಯಕ್ಕೆ ಬೆಂಗಳೂರು ನಗರ ವಿಭಾಗದಲ್ಲಿ ನೋಂದಣಿಯಾಗಿ ಚಾಲ್ತಿಯಲ್ಲಿರುವ ವಾಹನಗಳು |
|---|---|---|
| | ಸಾರಿಗೇತರ ವಾಹನ | |
| 1 | ದ್ವಿ ಚಕ್ರ ವಾಹನ | 6673285 |
| 2 | ಕಾರುಗಳು | 2086703 |
| 3 | ಆಮ್ನಿ ಬಸ್ಸುಗಳು | 4980 |
| 4 | ಟ್ರ್ಯಾಕ್ಟರ್‌ಗಳು | .35797 |
| 5 | ಟ್ರೈಲರ್‌ಗಳು | 13881 |
| 6 | ನಿರ್ಮಾಣ ಸಾಮಗ್ರಿ ವಾಹನ | 2122 |
| 7 | ಖಾಸಗಿ ಸೇವಾ ವಾಹನ | 431 |
| 8 | ಇತರೆ ವಾಹನ | 36460 |
| | **ಒಟ್ಟು ಸಾರಿಗೇತರ ವಾಹನ (ಎ)** | **8853659** |
| 9 | ಸರಕು ವಾಹನ | |
| ಅ | ಮಲ್ಟಿ ಆಕ್ಸಲ್ಡ್ /ಆರ್ಟಿಕ್ಯುಲೇಟೆಡ್ ವಾಹನ | 15149 |
| ಆ | ಟ್ರಕ್ಸ್ ಮತ್ತು ಲಾರಿಗಳು | 173517 |
| | **ಒಟ್ಟು** | **188666** |
| 10 | ಲಘು ಸರಕು ವಾಹನ | |
| ಅ | ನಾಲ್ಕು ಚಕ್ರಗಳ ವಾಹನ | 172484 |
| ಆ | ಮೂರು ಚಕ್ರಗಳ ವಾಹನ | 62629 |
| | **ಒಟ್ಟು** | **235113** |
| 11 | ಬಸ್ಸುಗಳು | 117196 |
| | **ಒಟ್ಟು** | **117196** |
| 12 | ಟ್ಯಾಕ್ಸಿಗಳು | |
| ಅ | ಮೋಟಾರು ಕ್ಯಾಬ್ | 197534 |
| ಆ | ಮ್ಯಾಕ್ಸಿ ಕ್ಯಾಬ್ | 54882 |
| ಇ | ಇತರೆ ಕ್ಯಾಬ್‌ಗಳು | 130 |
| | **ಒಟ್ಟು** | **252546** |
| 13 | ಲಘು ಪ್ರಯಾಣಿಕರ ವಾಹನ | |
| ಅ | 3 ಆಸನಗಳ ವಾಹನ | 290621 |
| 14 | ಇತರೆ ವಾಹನ | 73181 |
| | **ಒಟ್ಟು** | **363802** |
| | **ಒಟ್ಟು ಸಾರಿಗೆ ವಾಹನ (ಬಿ)** | **1157323** |
| | **ಒಟ್ಟು (ಸಾರಿಗೆ+ಸಾರಿಗೇತರ) (ಎ+ಬಿ)** | **10010982** |

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2289 ಕ್ಕೆ ಅನುಬಂಧ–ಆ**

ಬೆಂಗಳೂರು ನಗರ ಸಂಚಾರ ವಿಭಾಗದಿಂದ ಯೋಜನಾ ಬದ್ಧವಾಗಿ ರಸ್ತೆಗಳನ್ನು ನಿರ್ವಹಿಸಿ ಸಂಚಾರ ಸುಗಮಗೊಳಿಸುವ ಸಮಗ್ರ ಯೋಜನೆಯನ್ನು ಸಿದ್ದಪಡಿಸಿರುವುದಿಲ್ಲ. ಆದರೆ, ಬೆಂಗಳೂರು ನಗರದಲ್ಲಿ ವಾಹನ ಸಂಚಾರ ದಟ್ಟಣೆಯನ್ನು (Traffic Density) ತಿಳಿಗೊಳಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.

1. ಬೆಂಗಳೂರು ನಗರದಲ್ಲಿ ಇರುವ ರಸ್ತೆಗಳ ಮಿತಿಗಿಂತ ಹೆಚ್ಚು ವಾಹನಗಳು ಸಂಚರಿಸುತ್ತಿದ್ದು ವಾಹನ ದಟ್ಟಣೆಗೆ ಪ್ರಮುಖ ಕಾರಣವಾಗಿದ್ದು, ಇದನ್ನು ಸುಗಮಗೊಳಿಸಲು ಕೆಲವು ಪ್ರಮುಖ ರಸ್ತೆಗಳಲ್ಲಿ ಸಿಗ್ನಲ್ ಫ್ರೀ ಕಾರಿಡಾರ್‌ಗಳನ್ನು ಮಾಡಿ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.
2. ಸಂಚಾರ ದಟ್ಟಣೆ/ಸಮಸ್ಯೆಗಳು ಕಂಡು ಬರುತ್ತಿರುವ ಸ್ಥಳಗಳಲ್ಲಿ ಪರಿವೀಕ್ಷಣೆ ನಡೆಸಿ ಸುಗಮ ಸಂಚಾರದ ಹಿತದೃಷ್ಟಿಯಿಂದ ನಗರದ ಹಲವಾರು ಸ್ಥಳಗಳಲ್ಲಿ ಬಲ ತಿರುವು ಹಾಗೂ ಯು–ತಿರುವುಗಳನ್ನು ನಿರ್ಬಂಧಿಸಲಾಗಿದೆ.
3. ಬೆಂಗಳೂರು ನಗರದ ಕೇಂದ್ರ ಭಾಗದಲ್ಲಿನ ಹೆಚ್ಚು ಸಂಚಾರ ದಟ್ಟಣೆ ಇರುವ ಪ್ರದೇಶಗಳನ್ನು ಗುರುತಿಸಿ ರಸ್ತೆ ಅಗಲವಿದ್ದು ಮುಕ್ತ ಎಡ ತಿರುವು ಅಥವಾ ಬಲ ತಿರುವು ಇರುವ ಕಡೆಗಳಲ್ಲಿ ಸಂಚಾರ ಫರಿಕರಗಳನ್ನು (Street Furniture) ಅಳವಡಿಸಿ ಪಥ ಶಿಸ್ತನ್ನು ಜಾರಿ ಮಾಡಿ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡಲಾಗಿರುತ್ತದೆ.
4. ಪಿ.ಡಿ.ಎ. ಉಪಕರಗಣಗಳನ್ನು ಎ.ಎಸ್.ಐ, ಪಿ.ಎಸ್.ಐ, ಮತ್ತು ಪಿ.ಐ, ಹಂತದವರೆಗಿನ ಅಧಿಕಾರಿಗಳಿಗೆ ಹಂಚಿಕೆ ಮಾಡಲಾಗಿದ್ದು, ಇದರ ಮೂಲಕ ಸಂಚಾರ ನಿಯಮಗಳನ್ನು ಉಲ್ಲಂಘಿಸುವ ಚಾಲಕರುಗಳ ವಿರುದ್ಧ ಸ್ಥಳದಲ್ಲೇ ಸಂಚಾರ ಪೊಲೀಸ್ ಅಧಿಕಾರಿಗಳು ಪ್ರಕರಣಗಳನ್ನು ದಾಖಲಿಸಿ ಸ್ಥಳದಂಡವನ್ನು ಪಾವತಿಸಿಕೊಳ್ಳುವ ವ್ಯವಸ್ಥೆಯು ಪರಿಣಾಮಕಾರಿಯಾಗಿದ್ದು ಸುಗಮ ಸಂಚಾರಕ್ಕೆ ಸಹಕಾರಿಯಾಗಿದೆ.
5. ಬೆಂಗಳೂರು ನಗರದ 107 ಪ್ರಮುಖ ರಸ್ತೆಗಳನ್ನು ಗುರುತಿಸಿ ಝೀರೋ ಟಾಲರೆನ್ಸ್ ರಸ್ತೆ ಎಂಬುದಾಗಿ ಜಾರಿ ಮಾಡಲಾಗಿರುತ್ತದೆ. ಅಂತಹ ರಸ್ತೆಗಳಲ್ಲಿ ಯಾವುದೇ ರೀತಿಯ ಅನಧಿಕೃತ ವಾಹನ ನಿಲುಗಡೆ, ತಪ್ಪು ವಾಹನ ನಿಲುಗಡೆ ಹಾಗೂ ಫುಟ್‌ಪಾತ್ ಮೇಲೆ ವಾಹನ ನಿಲುಗಡೆಗಳಾಗದಂತೆ ಸಂಚಾರ ಅಧಿಕಾರಿಗಳ ಗಸ್ತುಗಳನ್ನು ಏರ್ಪಡಿಸಲಾಗಿರುತ್ತದೆ.
6. ಬೆಂಗಳೂರು ನಗರದ ರಸ್ತೆಗಳಲ್ಲಿ ಭಾರೀ ಸರಕು ಸಾಗಣಿ ವಾಹನಗಳಿಂದ ಸಂಚಾರ ಸಮಸ್ಯೆಗಳು ಕಂಡುಬಂದಿದ್ದ ಕಾರಣ ಬೆಂಗಳೂರು ನಗರದ ಪೊಲೀಸ್ ಆಯುಕ್ತರ ಸರಹದ್ದಿಗೆ ಒಳಪಡುವ ಎಲ್ಲಾ ರಸ್ತೆಗಳಲ್ಲಿಯೂ ಸರಕು ಸಾಗಣೆ ವಾಹನಗಳು ಬೆಳಿಗ್ಗೆ 11–00 ಗಂಟೆಯಿಂದ ಸಂಜೆ 04–00 ಗಂಟೆಯವರೆಗೆ ಹಾಗೂ ರಾತ್ರಿ 10–00 ಗಂಟೆಯಿಂದ ಬೆಳಿಗ್ಗೆ 07–00 ಗಂಟೆಯವರೆಗೆ ಸಂಚರಿಸುವಂತೆ ಹಾಗೂ ಬೆಳಗ್ಗೆ 07–00 ಗಂಟೆಯಿಂದ 11–00 ಗಂಟೆಯವರೆಗೆ ಹಾಗೂ ಸಂಜೆ 04–00 ಗಂಟೆಯಿಂದ ರಾತ್ರಿ 10–00 ಗಂಟೆಯವರೆಗೆ ಪೊಲೀಸ್ ಆಯುಕ್ತರ ಸರಹದ್ದಿಗೆ ಒಳಪಡುವ ಎಲ್ಲಾ ರಸ್ತೆಗಳಲ್ಲಿಯೂ ಸರಕು ಸಾಗಣೆ ವಾಹನಗಳ ಪ್ರವೇಶವನ್ನು ನಿರ್ಬಂಧಿಸಲಾಗಿದೆ.
7. ಪೀಕ್ ಅವರ್ಸ್‌ಗಳಲ್ಲಿ ಬೆಂಗಳೂರು ನಗರದ ಎಲ್ಲಾ ಜಂಕ್ಷನ್ ಮತ್ತು ರಸ್ತೆಗಳಲ್ಲಿ ಸಂಚಾರ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳು ಸಂಚಾರ ನಿರ್ವಹಣೆಯಲ್ಲಿ ತೊಡಗಿಕೊಂಡು ಸುಗಮ ವಾಹನ ಸಂಚಾರಕ್ಕೆ ಅನುವು ಮಾಡುತ್ತಿದ್ದಾರೆ.
8. ಪ್ರತಿಯೊಂದು ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಒಂದೊಂದು ಪ್ರಮುಖ ರಸ್ತೆಗಳನ್ನು ಗುರುತಿಸಿ ಮಾದರಿ ರಸ್ತೆಯನ್ನಾಗಿ ಅಳವಡಿಸಿಕೊಳ್ಳಲಾಗಿದೆ ಹಾಗೂ ಇಂತಹ ಮಾದರಿ ರಸ್ತೆಗಳಲ್ಲಿ ಯಾವುದೇ ರೀತಿಯ ಸಂಚಾರ ಸಮಸ್ಯೆಗಳು ಸಂಭವಿಸದಂತೆ ಹಾಗೂ ರಸ್ತೆ ಸುರಕ್ಷತೆ ಕಟ್ಟುನಿಟ್ಟಾಗಿ ಜಾರಿ ಮಾಡಲಾಗಿದೆ.

9. ಬೆಂಗಳೂರು ನಗರದಲ್ಲಿ ಅನಧಿಕೃತವಾಗಿ ನಿರ್ಮಿಸಲಾಗಿದ್ದ ರಸ್ತೆ ಉಬ್ಬರಗಳಿಂದ ಕಳೆದ ಹಲವು ವರ್ಷಗಳಲ್ಲಿ ಹಲವಾರು ದ್ವಿಚಕ್ರ ವಾಹನ ಸವಾರರು ಅದರಲ್ಲೂ ಪ್ರಮುಖವಾಗಿ ಇರುಳಿನ ಸಮಯದಲ್ಲಿ ಸ್ವಯಂ ಅಪಘಾತಕ್ಕೀಡಾಗಿ ಪ್ರಾಣ ಕಳೆದುಕೊಂಡಿರುತ್ತಾರೆ. ಇಂತಹ ಅಪಘಾತಗಳನ್ನು ತಡೆಯುವ ನಿಟ್ಟಿನಲ್ಲಿ ಬೆಂಗಳೂರು ನಗರ ಸಂಚಾರ ಪೊಲೀಸ್ ವಿಭಾಗವು ಬೆಂಗಳೂರು ನಗರದಾದ್ಯಂತ ಅವೈಜ್ಞಾನಿಕ ಹಾಗೂ ಅನಧಿಕೃತವಾಗಿ ನಿರ್ಮಿಸಲಾಗಿದ್ದ ರಸ್ತೆ ಉಬ್ಬರಗಳನ್ನು ತೆರವುಗೊಳಿಸಲಾಗಿದೆ. ಪ್ರಮುಖ ರಸ್ತೆಗಳಲ್ಲಿ ವಾಹನದ ವೇಗವನ್ನು ನಿಯಂತ್ರಿಸಿ ಅಪಘಾತಗಳನ್ನು ತಡೆಯುವ ಸಲುವಾಗಿ ಹಾಗೂ ಅವಶ್ಯಕವಿರುವ ಸ್ಥಳಗಳಲ್ಲಿ ಮಾತ್ರವೇ ಐ.ಆರ್.ಸಿ ಮಾದರಿಯಲ್ಲಿ ವೈಜ್ಞಾನಿಕವಾಗಿ ರಸ್ತೆ ಉಬ್ಬರಗಳನ್ನು ನಿರ್ಮಿಸಲಾಗಿದೆ.

10. ಪ್ರತಿ ಸಂಚಾರ ಪೊಲೀಸ್ ಠಾಣಾ ಮಟ್ಟದಲ್ಲಿ ಪ್ರತಿ ತಿಂಗಳ 3ನೇ ಶನಿವಾರಗಳಂದು ನಾಗರೀಕ ಸಂಚಾರ ವೇದಿಕೆ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದ್ದು, ಆಯಾ ಸಂಚಾರ ಠಾಣಾ ವ್ಯಾಪ್ತಿಯ ನಾಗರೀಕರು ತಮ್ಮ ಸಂಚಾರ ಸಮಸ್ಯೆಗಳನ್ನು ಠಾಣಾ ಮಟ್ಟದಲ್ಲಿ ಪರಿಹರಿಸಿಕೊಳ್ಳುವ ವೇದಿಕೆಯನ್ನು ಸೃಜಿಸಲಾಗಿದೆ.

11. ಬೆಂಗಳೂರು ನಗರದಲ್ಲಿ ಸಂಚಾರ ಸಮಸ್ಯೆಗಳನ್ನು ಪರಿಹರಿಸಲು ಹಾಗೂ ಸುಗಮ ಸಂಚಾರ ಜಾರಿ ಮಾಡಲು ಮತ್ತು ರಸ್ತೆಯಲ್ಲಿ ಸುರಕ್ಷತೆಯನ್ನು ಜಾರಿ ಮಾಡಲು ಹಲವಾರು ಕ್ರಮಗಳನ್ನು, ಆಂದೋಲನಗಳನ್ನು ಹಾಗೂ ವೃತ್ತಿಪರ ಚಾಲಕರುಗಳಿಗೆ ಹಲವಾರು ತರಬೇತಿ ಹಾಗೂ ರಸ್ತೆ ಸುರಕ್ಷತೆಯ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ನಡೆಸುತ್ತಿದ್ದು ರಸ್ತೆ ಸುರಕ್ಷತೆಯನ್ನು ಅತ್ಯುತ್ತಮ ರೀತಿಯಲ್ಲಿ ಜಾರಿ ಮಾಡಲಾಗಿದೆ.

12. ಸಂಚಾರ ನಿಯಮಗಳನ್ನು ಉಲ್ಲಂಘಿಸುವ ಚಾಲಕರುಗಳ ವಿರುದ್ಧ ಸ್ಥಳದಲ್ಲೇ ಸಂಚಾರ ಪೊಲೀಸ್ ಅಧಿಕಾರಿಗಳು ಪ್ರಕರಣಗಳನ್ನು ದಾಖಲಿಸಿ ಸ್ಥಳದಂಡವನ್ನು ಪಾವತಿಸಿಕೊಳ್ಳುತ್ತಾರೆ. ಪೀಕ್ ಅವರ್ಸ್‌ಗಳಲ್ಲಿ ಸಂಚಾರ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳು ಸಂಚಾರ ನಿರ್ವಹಣೆಯಲ್ಲಿ ತೊಡಗಿಕೊಂಡಿರುವ ಕಾರಣ ಅಂತಹ ಸಂದರ್ಭದಲ್ಲಿ ಕಣ್ಗಾವಲು, ಎನ್‌ಫೋರ್ಟ್‌ಮೆಂಟ್ ಹಾಗೂ ಡಿಜಿಟಲ್ ಕ್ಯಾಮರಾಗಳ ಮೂಲಕ ಉಲ್ಲಂಘನೆ ಎಸಗುವ ವಾಹನಗಳ ಛಾಯಾಚಿತ್ರವನ್ನು ಸೆರೆಹಿಡಿದು ಅವರುಗಳ ವಿರುದ್ಧ ಐ.ಎಂ.ವಿ. 133 ನೋಟೀಸ್‌ಗಳನ್ನು ಕಳುಹಿಸಿ ದಂಡ ಪಾವತಿಸಿಕೊಳ್ಳಲಾಗುತ್ತಿದೆ.

13. ನಗರದ ರಸ್ತೆಗಳಲ್ಲಿ ಸಂಚಾರ ಸಮಸ್ಯೆಗಳಿಗೆ ಪ್ರಮುಖ ಕಾರಣವಾಗಿರುವ ವಾಹನಗಳ ಅನಧಿಕೃತ, ತಪ್ಪು ನಿಲುಗಡೆ ಹಾಗೂ ಫುಟ್‌ಪಾತ್ ಮೇಲೆ ವಾಹನ ನಿಲುಗಡೆಗಳ ವಿರುದ್ಧ ಐ.ಎಂ.ವಿ. ಕಾಯ್ದೆಯಡಿಯಲ್ಲಿ ಪ್ರಕರಣಗಳನ್ನು ದಾಖಲು ಮಾಡುತ್ತಾ ಕಠಿಣ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.

14. ಮಧ್ಯಪಾನ ಮಾಡಿ ವಾಹನ ಚಾಲನೆ ಮಾಡುವವರನ್ನು ಪತ್ತೆ ಮಾಡಲು ಅತ್ಯಾಧುನಿಕ ಆಲ್ಕೋಮೀಟರ್‌ಗಳನ್ನು ಖರೀದಿಸಲಾಗಿದ್ದು, ಅವುಗಳ ಮೂಲಕ ಮಧ್ಯಪಾನ ಮಾಡಿ ವಾಹನ ಚಾಲನೆ ಮಾಡುತ್ತಿರುವವರನ್ನು ಪತ್ತೆ ಮಾಡಲಾಗುತ್ತಿದೆ. ಬೆಂಗಳೂರು ನಗರ ಸಂಚಾರ ಪೊಲೀಸ್ ವಿಭಾಗವು ಮಧ್ಯಪಾನ ಮಾಡಿ ವಾಹನ ಚಾಲನೆ ಮಾಡುವವರ ವಿರುದ್ಧ ಕಠಿಣ ಕ್ರಮಗಳನ್ನು ಕೈಗೊಂಡಿರುತ್ತದೆ.

15. ಸಂಚಾರ ನಿರ್ವಹಣಾ ಕೇಂದ್ರವು (ಟಿ.ಎಂ.ಸಿ.) ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು ಬೆಂಗಳೂರು ನಗರದಾದ್ಯಂತ ಅಳವಡಿಸಲಾಗಿರುವ 179 ಕಣ್ಗಾವಲು ಕ್ಯಾಮರಾದ ಮೂಲಕ ಟಿ.ಎಂ.ಸಿ.ಯಲ್ಲಿ ಅಳವಡಿಸಲಾಗಿರುವ ವಿಡಿಯೋವಾಲ್‌ನ ಮುಖಾಂತರ ಸಂಚಾರ ದಟ್ಟಣೆಯನ್ನು ನಿವಾರಿಸುವ ನಿಟ್ಟಿನಲ್ಲಿ ತೆಗೆದುಕೊಂಡ ಮೊದಲ ಹೆಜ್ಜೆ. 19 ಕಾರಿಡಾರ್‌ಗಳಲ್ಲಿ ಎರಡು ಪಾಳಿಯಲ್ಲಿ ನಿತ್ಯ ಕ್ಯಾಮರಾ ವೀಕ್ಷಿಸಿ ಜಂಕ್ಷನ್‌ಗಳಲ್ಲಿನ ಸಂಚಾರದ ದಟ್ಟಣೆಯನ್ನು ಪರಿಶೀಲಿಸಿ, ಸಿಗ್ನಲ್‌ಲೈಟ್‌ನ ಸಮಯವನ್ನು ಟಿ.ಎಂ.ಸಿ. ಯಿಂದಲೇ ಬದಲಾವಣೆ ಮಾಡುವ ಮೂಲಕ ಸಂಚಾರದ ಒತ್ತಡವನ್ನು ಕಡಿಮೆ ಮಾಡಿ ಸುಗಮ ಸಂಚಾರ ವ್ಯವಸ್ಥೆ ಕಲ್ಪಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ. ಬೆಂಗಳೂರು ನಗರ ಸಂಚಾರ ವಿಭಾಗದ ಪೊಲೀಸ್ ವೆಬ್‌ಸೈಟ್ ಅನ್ನು ಪ್ರತಿನಿತ್ಯ ಸಮಗ್ರ ಮಾಹಿತಿಗಳೊಂದಿಗೆ ಇಲ್ಲಿಯೇ ಅಫ್‌ಡೇಟ್ ಮಾಡಲಾಗುತ್ತಿರುತ್ತದೆ ಹಾಗೂ ನಗರದಲ್ಲಿ ಅಳವಡಿಸಲಾಗಿರುವ ಸಿಗ್ನಲ್‌ಲೈಟ್, ವಿ.ಎಂ.ಎಸ್, ಸರ್ವಿಲನ್ಸ್ ಕ್ಯಾಮರಾ ಇನ್ನಿತರೆ ತಾಂತ್ರಿಕ ಉಪಕರಣಗಳ ನಿಯಂತ್ರಣವನ್ನು ಮಾಡಬಹುದಲ್ಲದೆ ಸಂದರ್ಭಕ್ಕೆ ತಕ್ಕಂತೆ ಮಾರ್ಪಾಡುಗಳನ್ನು ಮಾಡುವ ತಂತ್ರಜ್ಞಾನವನ್ನು ಒಳಗೊಂಡಿರುತ್ತದೆ.

16. ಜಂಕ್ಷನ್‌ಗಳಲ್ಲಿ ಕಣ್ಗಾವಲು ಕ್ಯಾಮೆರಾಗಳನ್ನು ಹಾಗೂ ನಿಯಮ ಜಾರಿ ಕ್ಯಾಮೆರಾಗಳನ್ನು (Surveillance & Enforcement Cameras) ಅಳವಡಿಸಿದ್ದು, ಜಂಕ್ಷನ್‌ಗಳಲ್ಲಿ ಜರುಗುವ ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳನ್ನು ಸೆರೆಹಿಡಿದು ಮೋಟಾರು ವಾಹನ ಕಾಯ್ದೆ ಅಡಿಯಲ್ಲಿ ಪ್ರಕರಣಗಳನ್ನು ದಾಖಲಿಸಿ ಕ್ರಮಕೈಗೊಳ್ಳಲಾಗುತ್ತಿದೆ.

17. 10 ಜಂಕ್ಷನ್‌ಗಳಲ್ಲಿ ಆರ್.ಎಲ್.ವಿ.ಡಿ (Red Light Violation Detection) ಕ್ಯಾಮೆರಾಗಳನ್ನು ಅಳವಡಿಸಲಾಗಿದ್ದು ಸಿಗ್ನಲ್ ಜಂಪಿಂಗ್ ಮತ್ತು ಲೇನ್ ಡಿಸಿಪ್ಲಿನ್ ಉಲ್ಲಂಘನೆಗಳನ್ನು ಸ್ವಯಂಚಾಲಿತವಾಗಿ ಗುರುತಿಸುವ ಕ್ಷಮತೆಯನ್ನು ಹೊಂದಿರುವ ಸೌಲಭ್ಯವನ್ನು ಉಲ್ಲಂಘನೆ ಪ್ರಕರಣಗಳನ್ನು ದಾಖಲಿಸಲು ಬಳಸಿಕೊಳ್ಳಲಾಗುತ್ತಿದೆ.

18. ಸಾರ್ವಜನಿಕರನ್ನು ಸಹ ಪರಿಣಾಮಕಾರಿಯಾಗಿ ಸಂಚಾರ ನಿಯಮ ಉಲ್ಲಂಘನೆ ಪ್ರಕರಣಗಳನ್ನು ದಾಖಲಿಸುವ ನಿಟ್ಟಿನಲ್ಲಿ ಬಳಸಿಕೊಳ್ಳಲಾಗುತ್ತಿದ್ದು, ಪಬ್ಲಿಕ್ ಐ, ಐ ಚೇಂಜ್ ಮೈ ಸಿಟಿ ಆ್ಯಪ್‌ಗಳ ಜೊತೆಗೆ ಫೇಸ್‌ಬುಕ್, ಜಿ-ಮೇಲ್, ಘಚಿಣ ಂಠಿಠಿ ನಂತಹ ಸಾಮಾಜಿಕ ಜಾಲತಾಣವನ್ನು ಸಹ ಬಳಸಿಕೊಳ್ಳಲಾಗುತ್ತಿದೆ.

19. ಪ್ರಾಯೋಗಿಕವಾಗಿ ನಗರದ 50 ಸಂಚಾರ ಪೊಲೀಸ್ ಅಧಿಕಾರಿಗಳಿಗೆ ಬಾಡಿ ವೋರ್ನ್ ಕ್ಯಾಮೆರಾಗಳನ್ನು ವಿತರಿಸಲಾಗಿದ್ದು, ಇದರಿಂದಾಗಿ ಪರಿಣಾಮಕಾರಿಯಾಗಿ ನಿಯಮ ಜಾರಿಗೊಳಿಸಲು ಸಾಧ್ಯವಾಗುತ್ತಿದೆ ಜೊತೆಗೆ ಅಪಘಾತ ಪ್ರಕರಣಗಳ ತನಿಖೆಗೂ ಸಹ ಈ ಕ್ಯಾಮೆರಾಗಳನ್ನು ಬಳಸಬಹುದಾಗಿದೆ.

20. ಸಂಚಾರ ವಿಭಾಗದಲ್ಲಿದ್ದ ಸಿಬ್ಬಂದಿ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ಸರ್ಕಾರವು ಆದೇಶ ಸಂಖ್ಯೆ: ಹೆಚ್‌ಡಿ/247/ಪಿಓಪಿ/2016, ದಿನಾಂಕ:27.10.2016ರಲ್ಲಿ ಹೊಸದಾಗಿ 1577 ವಿವಿಧ ದರ್ಜೆಯ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಗಳ ಮಂಜೂರಾತಿ ಬಲವನ್ನು ಹೆಚ್ಚಿಸಿರುತ್ತದೆ.

21. ಬೆಂಗಳೂರು ನಗರದಲ್ಲಿ ಸಂಚಾರ ವಾರ್ಡನ್ ಸಂಸ್ಥೆ ಇದ್ದು, ಸಂಚಾರ ವಾರ್ಡನ್‌ಗಳನ್ನು ಸಹ ಸಂಚಾರ ನಿಯಂತ್ರಣಕ್ಕಾಗಿ ಬಳಸಿಕೊಳ್ಳಲಾಗುತ್ತಿದೆ.

22. ಇತರೆ ಇಲಾಖೆಗಳೊಂದಿಗೆ ಸಮನ್ವಯ ಸಾಧಿಸಿ, ಸಾರ್ವಜನಿಕರಿಗೆ ಹಾಗೂ ಸುಗಮ ಸಂಚಾರಕ್ಕೆ ಅನುವಾಗುವಂತೆ, ಕಾರ್ಯಯೋಜನೆ ರೂಪಿಸಿ ಪರಸ್ಪರ ಸಹಕಾರದಿಂದ ಯೋಜನೆಗಳು ಸಾಫಲ್ಯಗೊಳ್ಳುವಂತೆ ಕ್ರಮ ಕೈಗೊಳ್ಳಲಾಗಿದೆ.

23. ಮೂಲಭೂತ ಸೌಕರ್ಯ ವಿಸ್ತರಣೆಗೆ ಅಗತ್ಯವಿದ್ದ ಕಡೆ ಸಂಚಾರ ಮಾರ್ಗ ಬದಲಾವಣೆ ಮಾಡಿ ವೈಟ್‌ಟಾಪಿಂಗ್ ಹಾಗೂ ಇತರೆ ಕಾಮಗಾರಿಗಳಿಗೆ ಅಗತ್ಯವಿರುವ ನೆರವನ್ನು ನೀಡಲಾಗುತ್ತಿದೆ.

24. ಮೆಟ್ರೋ ಕಾಮಗಾರಿ ಕ್ಷಿಪ್ರವಾಗಿ ಪೂರ್ಣಗೊಳ್ಳಲು ಬೇಕಾದ ಎಲ್ಲಾ ರೀತಿಯ ಸಹಕಾರವನ್ನು ಬಿ.ಎಂ.ಆರ್.ಸಿ.ಎಲ್. ರವರಿಗೆ ನೀಡಲಾಗುತ್ತಿದೆ.

25. ಬೆಂಗಳೂರು ನಗರದ ಥಣಿಸಂದ್ರದಲ್ಲಿರುವ ರಸ್ತೆ ತರಬೇತಿ ಮತ್ತು ಸುರಕ್ಷತಾ ಸಂಸ್ಥೆಯಲ್ಲಿ ಸಂಚಾರ ವಿಭಾಗದ ವಿವಿಧ ದರ್ಜೆಯ ಅಧಿಕಾರಿಗಳಿಗೆ ಮೂಲ ತರಬೇತಿ ಹಾಗೂ ಪುನ:ಶ್ಚೇತನ ತರಬೇತಿಯನ್ನು ನೀಡಲಾಗುತ್ತಿದೆ.

26. ಬಿ-ಟ್ರ್ಯಾಕ್ ಯೋಜನೆಯಡಿಯಲ್ಲಿ ಸಂಚಾರ ವಿಭಾಗದ ಹಲವು ಕಡೆ ಜಂಕ್ಷನ್‌ಗಳ ಅಭಿವೃದ್ಧಿಯನ್ನು ಕೈಗೊಳ್ಳಲಾಗುತ್ತಿದೆ. ಈ ಕಾಮಗಾರಿಯಲ್ಲಿ ಸುಗಮ ಸಂಚಾರಕ್ಕೆ ಅಗತ್ಯವಿರುವ ಮಾರ್ಪಾಡುಗಳನ್ನು ವೈಜ್ಞಾನಿಕವಾಗಿ ನಿರ್ಮಿಸಲಾಗುತ್ತಿದೆ.

27. ನಗರದ ಪ್ರಮುಖ ರಸ್ತೆಗಳಲ್ಲಿ ವಾಹನಗಳ ಅನಧಿಕೃತ ನಿಲುಗಡೆಯನ್ನು ಪರಿಣಾಮಕಾರಿಯಾಗಿ ತಡೆಯುವ ನಿಟ್ಟಿನಲ್ಲಿ ಲಭ್ಯವಿರುವ ಸರ್ಕಾರಿ ಟೋಯಿಂಗ್ ವಾಹನಗಳ ಜೊತೆಗೆ ಹೆಚ್ಚುವರಿ ಖಾಸಗಿ ಟೋಯಿಂಗ್ ವಾಹನಗಳನ್ನು ಬಳಸಿ ಕ್ರಮಕೈಗೊಳ್ಳಲಾಗುತ್ತಿದೆ.

28. ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಸಂಚಾರ ವ್ಯವಸ್ಥೆಯನ್ನು ಉತ್ತಮ ಪಡಿಸುವ ಸಲುವಾಗಿ ನಗರ ವ್ಯಾಪ್ತಿಯಲ್ಲಿ ಈ ಕೆಳಕಂಡ 12 ರಸ್ತೆಗಳನ್ನು ಹೆಚ್ಚು ವಾಹನ ದಟ್ಟಣೆ ರಸ್ತೆಗಳೆಂದು ಗುರುತಿಸಲಾಗಿದ್ದು, ಸದರಿ ರಸ್ತೆಗಳಲ್ಲಿ ಆಗಬೇಕಾಗಿರುವ ಈ ಕೆಳಕಂಡ ಅಭಿವೃದ್ಧಿ ಕಾಮಗಾರಿಗಳನ್ನು ಮಾಡಿ ಕೊಡಲು ಸಂಬಂಧಪಟ್ಟ ಇಲಾಖೆಗೆ ಕೋರಲಾಗಿದೆ.

--4

| | | |
|---|---|---|
| 1 | ಬಳ್ಳಾರಿ ರಸ್ತೆ | ಚಾಲುಕ್ಯ ವೃತ್ತದಿಂದ ಹೆಬ್ಬಾಳದವರೆಗೆ<br>ವಿಂಡ್ಸರ್ ಮ್ಯಾನರ್ ಜಂಕ್ಷನ್ – ರಮಣ ಮಹರ್ಷಿ ರಸ್ತೆ – ಮೇಖ್ರಿ ವೃತ್ತದ ಮಾರ್ಗವಾಗಿ |
| 2 | ಹಳೇ ಮದ್ರಾಸ್ ರಸ್ತೆ | ಟ್ರಿನಿಟಿ ವೃತ್ತದಿಂದ ಕೆ.ಆರ್.ಪುರಂ ವರೆಗೆ<br>ಹಲಸೂರು ಕೆರೆ – ಹಳೇ ಮದ್ರಾಸ್ ರಸ್ತೆ ಮತ್ತು ಬೆನ್ನಿಗಾನಹಳ್ಳಿ ಹಾಗೂ ಕೆ.ಆರ್. ಪುರಂನಿಂದ ರಾಷ್ಟ್ರೀಯ ಹೆದ್ದಾರಿ 648 ವರೆಗೆ<br>ಹೂಡಿ – ಐ.ಟಿ.ಪಿ.ಎಲ್. ಮತ್ತು ಹೋಫ್ ಫಾರಂ ಮಾರ್ಗವಾಗಿ |
| 3 | ಹಳೇ ಏರ್‌ಪೋರ್ಟ್ ರಸ್ತೆ | ಎ.ಎಸ್.ಸಿ ಸೆಂಟರ್ ನಿಂದ ಕಾಡುಗೋಡಿ ವರೆಗೆ<br>ದೊಮ್ಮಲೂರು – ಮಾರತ್‌ಹಳ್ಳಿ – ಕುಂದಲಹಳ್ಳಿ – ವರ್ತೂರು ಮತ್ತು ಹೋಫ್ ಫಾರಂ ಮಾರ್ಗವಾಗಿ |
| 4 | ಸರ್ಜಾಪುರ ರಸ್ತೆ | ಹೊಸೂರು ರಸ್ತೆ ಸೇಂಟ್ ಜಾನ್ಸ್ ಆಸ್ಪತ್ರೆಯಿಂದ ಬಿ.ಬಿ.ಎಂ.ಪಿ. ವ್ಯಾಪ್ತಿಯ ಕಾರ್ಮೆಲ್ ರಾಂ ಬ್ರಿಡ್ಜ್‌ವರೆಗೆ<br>ಜಕ್ಕಸಂದ್ರ – ಇಬ್ಲೂರು – ಹರಳೂರು ಜಂಕ್ಷನ್ ಮಾರ್ಗವಾಗಿ |
| 5 | ಹೊಸೂರು ರಸ್ತೆ | ವೆಲ್ಲಾರ ಜಂಕ್ಷನ್‌ನಿಂದ ಸಿಲ್ಕ್ ಬೋರ್ಡ್‌ವರೆಗೆ<br>ಆಡುಗೋಡಿ – ಫೋರಂ ಮಾಲ್ ಮತ್ತು ಮಡಿವಾಳ ಮಾರ್ಗವಾಗಿ |
| 6 | ಬನ್ನೇರುಘಟ್ಟ ರಸ್ತೆ | ಡೈರಿ ವೃತ್ತದಿಂದ ನೈಸ್ ರಸ್ತೆವರೆಗೆ<br>ಜಯದೇವ ಫ್ಲೈಓವರ್ – ಜೆ.ಡಿ.ಮರ ಜಂಕ್ಷನ್ – ಬಿಳೇಕಳ್ಳಿ – ಅರಕೆರೆ ಮತ್ತು ಗೊಟ್ಟಿಗೆರೆ ಮಾರ್ಗವಾಗಿ |
| 7 | ಕನಕಪುರ ರಸ್ತೆ | ಕೆ.ಆರ್.ರಸ್ತೆಯಿಂದ ನೈಸ್ ರಸ್ತೆವರೆಗೆ<br>ಬನಶಂಕರಿ – ಸಾರಕ್ಕಿ – ಕೋಣನಕುಂಟೆ ಮಾರ್ಗವಾಗಿ |
| 8 | ಮೈಸೂರು ರಸ್ತೆ | ಹಡ್ಸನ್ ವೃತ್ತದಿಂದ ನೈಸ್ ರಸ್ತೆವರೆಗೆ<br>ಟೌನ್‌ಹಾಲ್ – ಸ್ಯಾಟಲೈಟ್ ಟೌನ್ – ನಾಯಂಡಹಳ್ಳಿ – ಜ್ಞಾನಭಾರತಿ – ಆರ್.ವಿ. ಕಾಲೇಜ್ ಆಫ್ ಇಂಜಿನಿಯರಿಂಗ್ ಮತ್ತು ಕೆಂಗೇರಿ ಸ್ಯಾಟಲೈಟ್ ಟೌನ್ ಮಾರ್ಗವಾಗಿ |
| 9 | ಮಾಗಡಿ ರಸ್ತೆ | ಹಳೇ ಬಿನ್ನಿ ಮಿಲ್‌ನಿಂದ ನೈಸ್ ರಸ್ತೆವರೆಗೆ<br>ಟೋಲ್‌ಗೇಟ್ ಜಂಕ್ಷನ್ – ಜೈಮುನಿರಾವ್ ವೃತ್ತ – ಹೌಸಿಂಗ್ ಬೋರ್ಡ್ – ಕಾಮಾಕ್ಷಿಪಾಳ್ಯ – ಹೊರವರ್ತುಲ ರಸ್ತೆ – ಶ್ರೀಗಂಧಕಾವಲ್ ಸುಂಕದಕಟ್ಟೆ ಮಾರ್ಗವಾಗಿ ಹಾಗೂ<br>ಅಂಜನ ನಗರ ಔಟರ್ ರಿಂಗ್ ರಸ್ತೆ – ಸೆಂಟ್ರಲ್ ಸಿಲ್ಕ್ ಬೋರ್ಡ್ ಜಂಕ್ಷನ್‌ನಿಂದ ಮೈಸೂರು ರಸ್ತೆ ವರೆಗೆ<br>ಜಯದೇವ – ಜೆ.ಡಿ.ಮರ ಜಂಕ್ಷನ್ ಮಾರ್ಗವಾಗಿ |
| 10 | ತುಮಕೂರು ರಸ್ತೆ | ಓಕಳಿಪುರಂನಿಂದ ಗೊರಗುಂಟೆಪಾಳ್ಯವರೆಗೆ<br>ಡಾ॥ ರಾಜ್‌ಕುಮಾರ್ ರಸ್ತೆ – ಸೋಪ್ ಫ್ಯಾಕ್ಟರಿ ಜಂಕ್ಷನ್ ಮತ್ತು ಯಶವಂತಪುರ ಮಾರ್ಗವಾಗಿ |
| 11 | ವೆಸ್ಟ್ ಆಫ್ ಕಾರ್ಡ್ ರಸ್ತೆ | ಸೋಪ್ ಫ್ಯಾಕ್ಟರಿಯಿಂದ ಮೈಸೂರು ರಸ್ತೆವರೆಗೆ<br>ಇಸ್ಕಾನ್ – ರಾಜಾಜಿನಗರ – ಟೋಲ್‌ಗೇಟ್ ಜಂಕ್ಷನ್, ವಿಜಯನಗರ ಮತ್ತು ದೀಪಾಂಜಲಿ ಮಾರ್ಗವಾಗಿ |
| 12 | ಹೊರ ವರ್ತುಲ ರಸ್ತೆ | ತುಮಕೂರು ರಸ್ತೆಯಿಂದ ತುಮಕೂರು ರಸ್ತೆವರೆಗೆ<br>ಹೆಬ್ಬಾಳ – ಕೆ.ಆರ್. ಪುರಂ – ಮಾರತ್‌ಹಳ್ಳಿ – ಇಬ್ಲೂರು, ಸೆಂಟ್ರಲ್ ಸಿಲ್ಕ್ ಬೋರ್ಡ್ – ಜೆ.ಡಿ.ಮರ ಜಂಕ್ಷನ್ – ನಾಯಂಡಹಳ್ಳಿ ಜಂಕ್ಷನ್ – ಕೊಟ್ಟಿಗೆಪಾಳ್ಯ ಜಂಕ್ಷನ್ ಮತ್ತು ಗೊರಗುಂಟೆಪಾಳ್ಯ ಮಾರ್ಗವಾಗಿ |

ಈ ಹೈಡೆನ್ಸಿಟಿ ಕಾರಿಡಾರ್‌ಗಳಲ್ಲಿ ಸುಗಮ ಸಂಚಾರದ ಹಿತದೃಷ್ಟಿಯಿಂದ ಕೈಗೊಳ್ಳಬೇಕಾದ ಅಭಿವೃದ್ಧಿ ಕಾರ್ಯಗಳು ಈ ಕೆಳಕಂಡಂತೆ ಇರುತ್ತದೆ.

- ರಸ್ತೆ ಮೇಲ್ಸೇತುವೆ ನಿರ್ಮಾಣ
- ಗ್ರೇಡ್ ಸೆಪರೇಟರ್/ಫ್ಲೈ ಓವರ್
- ಮಲ್ಟಿ ಲೆವೆಲ್ ಪಾರ್ಕಿಂಗ್
- ರಸ್ತೆ ಅಗಲೀಕರಣ
- ಜಂಕ್ಷನ್‌ಗಳ ಅಭಿವೃದ್ಧಿ
- ಬಾಟಲ್‌ನೆಕ್ ಇರುವ ಸ್ಥಳಗಳ ವಿಸ್ತರಣೆ
- ಸ್ಕೈ ವಾಕ್
- ಬಸ್ ಬೇಸ್
- ಕಣ್ಗಾವಲು, ನಿಯಮ ಜಾರಿ ಕ್ಯಾಮೆರಾಗಳ ಅಳವಡಿಕೆ
- ಸಿಗ್ನಲ್ ಲೈಟ್‌ಗಳ ಅಳವಡಿಕೆ
- ಪಾದಚಾರಿ ರಸ್ತೆಗಳ ಉನ್ನತೀಕರಣ
- ರಸ್ತೆ ಉಬ್ಬರಗಳು ಮತ್ತು ಎತ್ತರಿಸಿದ ಪಾದಚಾರಿ ರಸ್ತೆ ದಾಟು ಅಳವಡಿಕೆ
- ರಸ್ತೆಗಳಿಗೆ ಮೀಡಿಯನ್ ಅಳವಡಿಕೆ
- ಮಳೆ ಬಂದಾಗ ನೀರು ನಿಲ್ಲುವ ಸ್ಥಳಗಳ ದುರಸ್ಥಿ
- ರಸ್ತೆಗಳಲ್ಲಿ ಬಿದ್ದಿರುವ ಗುಂಡಿಗಳ ಮುಚ್ಚುವಿಕೆ ಇತ್ಯಾದಿ

ವಿಸ್ತೃತವಾಗಿ ಮಾಹಿತಿಯನ್ನು ಸಿದ್ಧಪಡಿಸಿದ್ದು ಈಗಾಗಲೇ ಸಂಬಂಧಪಟ್ಟ ಪೌರಸಂಸ್ಥೆಗಳು ಮೇಲ್ಕಂಡ ಅಭಿವೃದ್ಧಿ ಕಾರ್ಯಗಳಲ್ಲಿ ಕಾರ್ಯಪ್ರವೃತಿಗೊಂಡಿದ್ದು ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. ರಾಜ್ಯದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ವಿವಿಧ ಇಲಾಖೆಗಳ ಮುಖ್ಯಸ್ಥರುಗಳೊಂದಿಗೆ ಆಗಿಂದಾಗ್ಗೆ ಸಭೆಗಳನ್ನು ಹಮ್ಮಿಕೊಂಡು ಕಾರ್ಯ ಪ್ರಗತಿಗಳನ್ನು ಪರಿಶೀಲಿಸಲಾಗುತ್ತಿದೆ.

ಬೆಂಗಳೂರು ನಗರದಲ್ಲಿ ಪ್ರತಿ ನಿತ್ಯ ಹೆಚ್ಚುತ್ತಿರುವ ಜನಸಂಖ್ಯೆ ಮತ್ತು ವಾಹನ ಸಂಖ್ಯೆಗೆ ಪ್ರಮುಖ ಕಾರಣವಾದ ಆರ್ಥಿಕ ಉದಾರೀಕರಣದ ಪರಿಣಾಮದಿಂದ ಹೊಸ ಬಡಾವಣೆಗಳ ನಿರ್ಮಾಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ಸ್ಥಾಪನೆ, ಮಾಹಿತಿ/ಜೈವಿಕ ತಂತ್ರಜ್ಞಾನ ಸಂಸ್ಥೆಗಳ ಸ್ಥಾಪನೆ ಇವೆಲ್ಲದರ ನೇರ ಪರಿಣಾಮವಾಗಿ ವಾಹನಗಳ ಸಂಚಾರ ಹೆಚ್ಚುತ್ತಲೇ ಇದೆ. ಜನಸಂಖ್ಯೆ ಹಾಗೂ ವಾಹನಗಳ ಸಂಖ್ಯೆಯಲ್ಲಿ ಹೆಚ್ಚಳಗೊಂಡಿದ್ದರ ಪರಿಣಾಮ ಅನೇಕ ರೀತಿಯಲ್ಲಿ ಸಂಚಾರ ಸಮಸ್ಯೆಗಳು ಅಂದರೆ ಸಂಚಾರದಲ್ಲಿ ದಟ್ಟಣೆ, ಸುಗಮ ಸಂಚಾರಕ್ಕೆ ಅಡ್ಡಿ, ಸಂಚಾರ ಸ್ಥಗಿತಗಳ ಜೊತೆಗೆ ಅಪಘಾತಗಳ ಹೆಚ್ಚಳಕ್ಕೆ ಕಾರಣವಾಗಿದೆ. ಈ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸಿ ಘನ ಸರ್ಕಾರವು ಬೆಂಗಳೂರು ನಗರ ಸಂಚಾರ ವ್ಯವಸ್ಥೆ ಸುಧಾರಣೆಗೆ ಹತ್ತು ಹಲವು ವಿನೂತನ ಯೋಜನೆಗಳನ್ನು ಹಂತಹಂತವಾಗಿ ಹಮ್ಮಿಕೊಳ್ಳುವ ಸಲುವಾಗಿ ಕಾರ್ಯ ಯೋಜನೆಯನ್ನು ಸಿದ್ಧಪಡಿಸಿ ಸರ್ಕಾರದ ಅಡಿ ಇರುವ ಎಲ್ಲಾ ಇಲಾಖೆಗಳು ಒಂದೇ ಸೂರಿನಡಿ ಸೇರಿ ಕಾರ್ಯನಿರ್ವಹಿಸುವ ನಿಟ್ಟಿನಲ್ಲಿ ಶ್ರಮ ವಹಿಸುತ್ತಿದೆ. ಸರ್ಕಾರದ ಆದೇಶದ ಮೇರೆಗೆ ಹೈಡೆನ್ಸಿಟಿ ಕಾರಿಡಾರ್ ರಸ್ತೆಗಳಲ್ಲಿನ ಆಗಬೇಕಾದ ಅಭಿವೃದ್ಧಿ ಕಾರ್ಯಗಳನ್ನು ಪೂರೈಸಲು ಕೆ.ಆರ್.ಡಿ.ಸಿ.ಎಲ್.ಗೆ ವಹಿಸಲಾಗಿದೆ. ಮುಂದಿನ ದಿನಗಳಲ್ಲಿ ಸುಗಮ ಸಂಚಾರ ಏರ್ಪಡಿಸುವ ನಿಟ್ಟಿನಲ್ಲಿ ಈಗಾಗಲೇ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಭೆಯನ್ನು ನಡೆಸಲಾಗುತ್ತಿದೆ.